# 1. ಅಲ್ ಫಾತಿಹಃ

## ಪರಿಚಯ

'**ಅ**ಲ್ ಫಾತಿಹಃ' ಎಂಬುದು ಈ ಅಧ್ಯಾಯದ ಹೆಸರು. ಒಂದು ವಿಷಯ ಅಥವಾ ಪ್ರಬಂಧದ ಉದ್ಘಾಟನೆಗೆ 'ಫಾತಿಹಾ' ಎನ್ನಲಾಗುತ್ತದೆ. ಇದಕ್ಕೆ ಪೀಠಿಕೆ ಅಥವಾ ಮಾತಿನ ಆರಂಭ ಎಂಬ ಅರ್ಥವೂ ಬರುತ್ತದೆ. ಮುಹಮ್ಮದ್‌ರವರ(ಸ) ಪ್ರವಾದಿತ್ವದ ಆರಂಭ ಕಾಲದಲ್ಲಿ ಅವತೀರ್ಣಗೊಂಡ ಪರಿಪೂರ್ಣ ಅಧ್ಯಾಯ ಇದೇ ಆಗಿದೆ. ಇದಕ್ಕಿಂತ ಮುಂಚೆ ಕೆಲವು ಸೂಕ್ತಗಳಷ್ಟೆ ಆಗೊಮ್ಮೆ ಈಗೊಮ್ಮೆ ಅವತೀರ್ಣಗೊಳ್ಳುತ್ತಿದ್ದುವು.

ಈ ಅಧ್ಯಾಯವು ಕುರ್‌ಆನಿನ ಅಧ್ಯಯನ ಮಾಡಬಯಸುವ ಪ್ರತಿಯೊಬ್ಬ ಮನುಷ್ಯನಿಗೂ ಅಲ್ಲಾಹನು ಕಲಿಸಿಕೊಟ್ಟ ಒಂದು ಪ್ರಾರ್ಥನೆಯಾಗಿದೆ. ಈ ಗ್ರಂಥದ ಪ್ರಯೋಜನ ಪಡೆಯ ಬಯಸುವಿರಾದರೆ, ಮೊತ್ತಮೊದಲು ಜಗದೊಡೆಯ, ಸೃಷ್ಟಿಕರ್ತನಲ್ಲಿ ಈ ರೀತಿ ಪ್ರಾರ್ಥಿಸಬೇಕೆಂದು ತಿಳಿಸಲಿಕ್ಕಾಗಿ ಇದನ್ನು ಗ್ರಂಥದ ಆರಂಭದಲ್ಲಿ ಇರಿಸಲಾಗಿದೆ.

ಕುರ್‌ಆನ್ ಮತ್ತು ಅಲ್ ಫಾತಿಹಾ ಅಧ್ಯಾಯದ ಸಂಬಂಧವು ಒಂದು ಗ್ರಂಥ ಮತ್ತು ಅದರ ಮುನ್ನುಡಿಯೆಂಬಂತಿರದೆ, ಒಂದು ಪ್ರಾರ್ಥನೆ ಮತ್ತು ಅದರ ಉತ್ತರ ದಂತಿದೆ. ದಾಸನು ತನ್ನ ಪ್ರಭುವಿನಲ್ಲಿ ಸನ್ಮಾರ್ಗವನ್ನು ಬೇಡುತ್ತಾನೆ. ಅದಕ್ಕೆ ಉತ್ತರವಾಗಿ ಅಲ್ಲಾಹನು 'ಸನ್ಮಾರ್ಗ ಇದೋ ಇಲ್ಲಿದೆ'ಯೆಂದು ಇಡೀ ಕುರ್‌ಆನನ್ನು ಅವನ ಮುಂದಿಡುತ್ತಾನೆ.

ಸೂ. 7

# 1. ಅಲ್ ಫಾತಿಹಃ

ರು. 1

(ಅವತೀರ್ಣ - ಮಕ್ಕಾದಲ್ಲಿ)

1. ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ. — بِسْمِ اللّٰهِ الرَّحْمٰنِ الرَّحِيْمِ ○

2. ಅಲ್ಲಾಹನಿಗೇ ಸರ್ವಸ್ತುತಿ[1] ಅವನು ಸಕಲ ವಿಶ್ವದ ಪ್ರಭು.[2] — اَلْحَمْدُ لِلّٰهِ رَبِّ الْعٰلَمِيْنَ ۝٢

3. ಪರಮ ದಯಾಳು, ಕರುಣಾನಿಧಿ- — الرَّحْمٰنِ الرَّحِيْمِ ۝٣

4. ನಿರ್ಣಾಯಕ ದಿನದ ಅಧಿಪತಿ (ಆದ ಪ್ರಭುವೇ)- — مٰلِكِ يَوْمِ الدِّيْنِ ۝٤

5. ನಾವು ನಿನಗೆ ಮಾತ್ರ ಇಬಾದತ್[3] ಮಾಡುತ್ತೇವೆ ಮತ್ತು ನಿನ್ನಿಂದ ಮಾತ್ರ ಸಹಾಯ ಬೇಡುತ್ತೇವೆ. — اِيَّاكَ نَعْبُدُ وَاِيَّاكَ نَسْتَعِيْنُ ۝٥

6. ನಮಗೆ ಸನ್ಮಾರ್ಗವನ್ನು ತೋರಿಸು. — اِهْدِنَا الصِّرَاطَ الْمُسْتَقِيْمَ ۝٦

7. ನೀನು ಅನುಗ್ರಹಿಸಿದವರ ಮಾರ್ಗ. ನಿನ್ನ ಕ್ರೋಧಕ್ಕೆ ಪಾತ್ರರಾದವರ ಮಾರ್ಗವಲ್ಲ. (ನೀನು ತೋರಿದ) ದಾರಿಯನ್ನು ತಪ್ಪಿ ನಡೆದವರ ಮಾರ್ಗವೂ ಅಲ್ಲ.[4] — صِرَاطَ الَّذِيْنَ اَنْعَمْتَ عَلَيْهِمْ ۙ غَيْرِ الْمَغْضُوْبِ عَلَيْهِمْ وَلَا الضَّآلِّيْنَ ۝٧

---

1. ತನ್ನ ಪ್ರಭುವಿನ ಸನ್ನಿಧಿಯಲ್ಲಿ ಮನವಿಯ ರೂಪದಲ್ಲಿ ಮುಂದಿರಿಸಲಿಕ್ಕಾಗಿ ಅಲ್ಲಾಹನೇ ಈ 'ಅಲ್ ಫಾತಿಹಃ'(ಅಧ್ಯಾಯ)ವನ್ನು ತನ್ನ ದಾಸರಿಗೆ ಕಲಿಸಿದ್ದಾನೆ.

2 'ರಬ್ಬ್' (ಪ್ರಭು) ಎಂಬ ಪದವನ್ನು ಅರಬಿ ಭಾಷೆಯಲ್ಲಿ ಮೂರು ಅರ್ಥಗಳಲ್ಲಿ ಬಳಸಲಾಗುತ್ತದೆ: 1) ಮಾಲಕ ಮತ್ತು ಒಡೆಯ. II) ಪೋಷಕ, ಪರಿಪಾಲಕ, ಮೇಲ್ವಿಚಾರಕ, ಮೇಲ್ನೋಟವಿರಿಸುವವ. III) ಆಜ್ಞಾಧಿಕಾರಿ, ಸಾರ್ವಭೌಮ, ವ್ಯವಸ್ಥಾಪಕ ಮತ್ತು ಆಡಳಿತಗಾರ. ಅಲ್ಲಾಹನು ಈ ಎಲ್ಲಾ ಅರ್ಥಗಳಲ್ಲೂ ವಿಶ್ವದ ಪ್ರಭುವಾಗಿದ್ದಾನೆ.

3. 'ಇಬಾದತ್' ಎಂಬ ಪದವನ್ನು ಅರಬಿ ಭಾಷೆಯಲ್ಲಿ ಮೂರು ಅರ್ಥಗಳಲ್ಲಿ ಪ್ರಯೋಗಿಸಲಾಗುತ್ತದೆ: I) ಆರಾಧನೆ ಮತ್ತು ಉಪಾಸನೆ. II) ಅನುಸರಣೆ ಮತ್ತು ಆಜ್ಞಾಪಾಲನೆ. III) ದಾಸ್ಯ ಮತ್ತು ಗುಲಾಮಗಿರಿ.

4. ದಾಸನ ಈ ಪ್ರಾರ್ಥನೆಯ ಉತ್ತರವೇ ಈ ಸಂಪೂರ್ಣ ಕುರ್‌ಆನ್. ದಾಸ ತನ್ನ ಒಡೆಯನಿಂದ ಮಾರ್ಗದರ್ಶನ ಯಾಚಿಸುತ್ತಾನೆ. ಅದಕ್ಕುತ್ತರವಾಗಿ ಪ್ರಭು ಅವನಿಗೆ ಈ ಕುರ್‌ಆನನ್ನು ದಯಪಾಲಿಸುತ್ತಾನೆ.